ಪ್ರತಿಬಿಂಬ

PRATIBIMBA – Multidisciplinary Kannada Research Journal of IIMRD
ISSN (E): XXXX-XXXX
Vol-1 Issue 1, July-August 2019, 74-79
©*IIMRD*, Mysuru

IIMRD JOURNALS
www.iimrd.com

# ಜೇನುಕುರುಬರ ಜೀವನ ಮತ್ತು ಸಂಸ್ಕೃತಿ

**ಡಾ. ಬಿ.ಆರ್.ಮಂಜುನಾಥ [1]**

**ಪೀಠಿಕೆ:**

ಜೇನುಕುರುಬ ಬುಡಕಟ್ಟು ಸಮುದಾಯವು ಕರ್ನಾಟಕದ ವಿಶೇಷ ದುರ್ಬಲ ಬುಡಕಟ್ಟು ಗುಂಪಿಗೆ (Particularly Vulnerable Tribal Group) ಸೇರಿದ ಸಮುದಾಯವಾಗಿದ್ದು, ರಾಜ್ಯದ ಮೈಸೂರು ಜಿಲ್ಲೆಯ ಹುಣಸೂರು, ಪಿರಿಯಾಪಟ್ಟಣ, ಹೆಚ್.ಡಿ.ಕೋಟೆ, ನಂಜನಗೂಡು ತಾಲ್ಲೂಕುಗಳಲ್ಲಿ, ಕೊಡಗು ಜಿಲ್ಲೆಯ ವಿರಾಜಪೇಟೆ, ಸೋಮವಾರಪೇಟೆ ತಾಲ್ಲೂಕುಗಳಲ್ಲಿ ಮತ್ತು ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ಕಂಡುಬರುತ್ತಾರೆ. ಇದಲ್ಲದೆ ಕೇರಳ ಮತ್ತು ತಮಿಳುನಾಡು ರಾಜ್ಯಗಳಲ್ಲಿಯೂ ಕಂಡು ಬರುತ್ತಾರೆ.

**ವಾಸಸ್ಥಾನ**

ಜೇನುಕುರುಬರು ವಾಸಿಸುವ ಸ್ಥಳವನ್ನು ಹಾಡಿ, ಪೋಡು ಅಥವಾ ಕಾಲೋನಿ ಎಂಬ ಹೆಸರಿನಿಂದ ಕರೆಯಲಾಗುತ್ತದೆ. ಹಿಂದೆ ಇವರು ವಾಸಿಸುವ ಮನೆಗಳು 5 ಅಡಿ ಅಗಲ ಮತ್ತು 7 ಅಡಿ ಉದ್ದದ ಜಾಗದಲ್ಲಿ ಬಿದಿರು, ಹುಲ್ಲು, ಕಲ್ಲು, ಮಣ್ಣನ್ನು ಬಳಸಿ ಪುಟ್ಟ ಗುಡಿಸಲುಗಳನ್ನು ನಿರ್ಮಿಸಿ ವಾಸಿಸುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಸರ್ಕಾರವು ಹೆಂಚು ಮತ್ತು ಶೀಟಿನ ಮನೆಗಳನ್ನು ನಿರ್ಮಿಸಿಕೊಟ್ಟಿದ್ದಾರೆ. ಆದರೆ ಈ ಮನೆಗಳು ಕಳಪೆ ಗುಣಮಟ್ಟದಿಂದ ಕೂಡಿದ್ದು, ವಾಸಿಸಲು ಯೋಗ್ಯವಾಗಿಲ್ಲದ ಕಾರಣ ಕೆಲವು ಹಾಡಿಗಳಲ್ಲಿ ಈಗಿರುವ ಮನೆಯ ಹಿಂಭಾಗ ಸಾಂಪ್ರದಾಯಿಕ ಮಾದರಿಯಲ್ಲಿ ಪುಟ್ಟ ಗುಡಿಸಲನ್ನು ಕಟ್ಟಿಕೊಂಡು ವಾಸಿಸುತ್ತಿದ್ದಾರೆ. ಸಾಮಾನ್ಯವಾಗಿ ಯಾವುದೇ ಮನೆಗೆ ಶೌಚಾಲಯವಾಗಲಿ, ಸ್ನಾನದ ಮನೆಯಾಗಲಿ ಇಲ್ಲ. ಆದ ಕಾರಣ ಸ್ನಾನಕ್ಕಾಗಿ ಬಿದಿರು ಅಥವಾ ತೆಂಗಿನ ಗರಿಗಳನ್ನು ಬಳಸಿ ಸ್ನಾನದ ಮನೆಗಳನ್ನು ನಿರ್ಮಿಸಿಕೊಂಡಿರುತ್ತಾರೆ. ಹಾಡಿ ಮತ್ತು ಮನೆಯಲ್ಲಿ ಹೆಚ್ಚಿನ ಸ್ವಚ್ಚತೆ ಇರುತ್ತದೆ ಆದರೆ ವೈಯಕ್ತಿಕ ಸ್ವಚ್ಚತೆ ಅಷ್ಟು ಮುಖ್ಯವಾಗಿ ಕಾಣುವುದಿಲ್ಲ.

**ಆರ್ಥಿಕ ಜೀವನ**

ಜೇನುಕುರುಬರು ಆರ್ಥಿಕವಾಗಿ ಅತ್ಯಂತ ಹಿಂದಿಳಿದಿದ್ದು, ಜೇನುಸಂಗ್ರಹಣೆ ಇವರ ಸಾಂಪ್ರದಾಯಿಕ ಕಸುಬಾಗಿದೆ. ಹಾರುವ ಒಂದು ಜೇನು ಹುಳುವಿನಿಂದ ಜೇನುಗೂಡು ಕಂಡುಹಿಡಿಯುವ ಚತುರರಾದ ಇವರು

---

[1] *ಯುಜಿಸಿ–ಪೋಸ್ಟ್ ಡಾಕ್ಟೋರಲ್ ಫೆಲೋ, ಮಾನವಶಾಸ್ತ್ರ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು–06*

ಜೇನು, ನೆಲ್ಲಿ, ಜೇನುಮೇಣ, ಮರದಮೇಣ, ಅಂಟುವಾಳ, ಅರಳೆಕಾಯಿ, ಮರದಪಾಸೆ, ಕಲ್ಲುಪಾಸೆ ಮುಂತಾದ ಕಿರು ಅರಣ್ಯ ಉತ್ಪನ್ನವನ್ನು ಸಂಗ್ರಹಿಸಿ ಲ್ಯಾಂಪ್ಸ್ ಸೊಸೈಟಿಗೆ ಮಾರಾಟ ಮಾಡಿ ಜೀವನ ಮಾಡುತ್ತಾರೆ.

ಆದರೆ ಇತ್ತೀಚೆಗೆ ಅರಣ್ಯ ಕಾಯ್ದೆ ಹೆಸರಿನಲ್ಲಿ ಅರಣ್ಯದಿಂದ ಹೊರ ಹಾಕಿ ಅತಂತ್ರನಾಗಿಸಿದ ನಂತರ ಕೂಲಿ ಮಾಡಿ ಜೀವನ ದೂಡುವಂತಾಗಿದೆ. ಕೆಲವರು ಮಾತ್ರ ಸರ್ಕಾರ ಕೊಟ್ಟಿರುವ ಜಮೀನಿನಲ್ಲಿ ರಾಗಿ, ಜೋಳ, ಹುರುಳಿ, ಕಡ್ಲೆಕಾಯಿ ಸೂರ್ಯಕಾಂತಿ, ಮೆಣಸಿನಕಾಯಿ, ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಆದರೆ ಸ್ವಂತ ಬೇಸಾಯ ಮಾಡುವವರು ಕೇವಲ 10% ರಿಂದ 20% ಕುಟುಂಬಗಳು ಮಾತ್ರ. ಏಕೆಂದರೆ ಕಾಡು ಪ್ರಾಣಿಗಳ ಹಾವಳಿ, ಆಧುನಿಕ ಕೃಷಿ ಸಲಕರಣೆಗಳ ಕೊರತೆ, ಬಂಡವಾಳದ ಕೊರತೆ ಮುಂತಾದ ಸಮಸ್ಯೆಗಳಿಂದ ಆದಾಯ ಕಡಿಮೆಯಿದೆ. ಇವೆಲ್ಲದರ ಪರಿಣಾಮವಾಗಿ ಸರ್ಕಾರವು ಇವರಿಗಾಗಿ ನೀಡಿರುವ ಜಮೀನನ್ನು ಕೇರಳ ಮತ್ತು ತಮಿಳುನಾಡಿನ ರೈತರಿಗೆ ಗುತ್ತಿಗೆಗೆ ನೀಡಿ ತಮ್ಮ ಜಮೀನಿನಲ್ಲಿ ತಾವೇ ಕೂಲಿಯಾಳುಗಳಾಗಿ ದುಡಿಯುತ್ತಿದ್ದಾರೆ. ಜೇನುಕುರುಬರಲ್ಲಿ ಬೆರಳೆಣಿಕೆ ಮಂದಿ ಅರಣ್ಯ ಇಲಾಖೆಯಲ್ಲಿ ಖಾಯಂ ಅಥವಾ ಹಂಗಾಮಿ ನೌಕರರಾಗಿದ್ದಾರೆ. ಬಂಡಿಪುರದ ಸುತ್ತಮುತ್ತವಿರುವ ಹಾಡಿಗಳಲ್ಲಿನ ಕೆಲವು ಯುವಕರು ಅರಣ್ಯದಲ್ಲಿರುವ ರೆಸಾರ್ಟ್‌ಗಳಲ್ಲಿ, ಹೋಟೆಲ್‌ಗಳಲ್ಲಿ ಸಹಾಯಕರಾಗಿ, ವಾಚ್‌ಮನ್‌ಗಳಾಗಿ ದುಡಿಯುತಿದ್ದಾರೆ. (ಮಧು–2002) ಇವರು ಕೂಲಿಗೆ ಹೋಗಲು ಇಷ್ಟ ಪಡುವುದಿಲ್ಲ, ಬದಲಿಗೆ ಕಾಡಿನಲ್ಲಿ ಅಲೆಯುತ್ತಾರೆ ಸಣ್ಣಪುಟ್ಟ ಬೇಟೆ, ಗೆಡ್ಡೆಗೆಣಸು, ಜೇನು, ಹಣ್ಣು ಸಂಗ್ರಹ ಮಾಡುವುದರಲ್ಲಿ ವೇಳೆ ಕಳೆಯುತ್ತಾರೆ. ಆದರೆ ಇತ್ತೀಚೆಗೆ ಕಾನೂನು ಕಾಯ್ದೆಗಳಿಂದಾಗಿ ಅವರ ಮೂಲ ವೃತ್ತಿಗೆ ಪೆಟ್ಟು ಬಿದ್ದಿದ್ದು ಕೂಲಿಗಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ವಲಸೆ ಹೋಗುವುದು ಸಾಮಾನ್ಯವಾಗಿದೆ.

**ಜನನ ಮತ್ತು ನಾಮಕರಣ ಪದ್ಧತಿ**

ಜೇನುಕುರುಬರಲ್ಲಿ ಜನನ ಸಂಸ್ಕಾರವು ಪ್ರಮುಖವಾದುದು. ಪ್ರಸವದ ಸಮಯದಲ್ಲಿ ಸಮುದಾಯದ ಯಜಮಾನನ ಮುಖಾಂತರ ಪ್ರತ್ಯೇಕ ಗುಡಿಸಲನ್ನು ನಿರ್ಮಿಸಿ ಆ ಗುಡಿಸಿಲಿನೊಳಗೆ ಚಾಪೆ ಹಾಕಿ ತಿಳುವಳಿಕೆ ಇರುವ ಅನುಭವಸ್ಥ ಸ್ತ್ರೀಯರಿಂದ ಹೆರಿಗೆ ಮಾಡಿಸುತ್ತಾರೆ. ಆದರೆ ಇತ್ತೀಚೆಗೆ ಆರೋಗ್ಯ ಕಾರ್ಯಕರ್ತೆಯರು ಹೆರಿಗೆ ಸಂದರ್ಭದಲ್ಲಿ ಆಸ್ಪತ್ರೆಗೆ ಕರೆದುಕೊಂಡು ಹೋಗುವ ಸಂಪ್ರದಾಯವಿದೆ. ಮಗು ಹುಟ್ಟಿದ ಹನ್ನೆರಡನೇ ದಿನಕ್ಕೆ ನಾಮಕರಣಶಾಸ್ತ್ರವನ್ನು ನೆರವೇರಿಸುತ್ತಾರೆ. ಸಾಮಾನ್ಯವಾಗಿ ಇವರ ಹೆಸರುಗಳು ಮನೆದೇವರಿಗೆ ಸಂಬಂಧಿಸಿದುದಾಗಿರುತ್ತದೆ. ಉದಾ: ಮಾಸ್ತಿ, ಮಾರ, ಸಿದ್ಧ, ಮಾದ, ಕಾಳಯ್ಯ, ಕರಿಯ, ಕೃಷ್ಣಯ್ಯ ಮುಂತಾದ ಹೆಸರುಗಳಿಂದ ಹಾಗೆಯೇ ಹೆಣ್ಣು ಮಕ್ಕಳಿಗೆ ಕಾಳಿ, ಚೆಲುವಿ, ಮಾದಿ, ನಿಂಗಮ್ಮ, ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಇತರ ಸಮುದಾಯಗಳ ಸಂಪರ್ಕದಿಂದಾಗಿ ಕುಮಾರ, ಮಹದೇವ, ಮಧು, ಆನಂದ ಮುಂತಾದ ಹೆಸರುಗಳಿಂದ ಹಾಗೂ ಹೆಣ್ಣುಮಕ್ಕಳಿಗೆ ಸವಿತಾ, ಲಲಿತಾ, ಸರಿತಾ, ಸೌಮ್ಯ, ರಾಧ, ವೀಣಾ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ. ಮಗುವಿನ ಹೆಸರು ಮನೆ ದೇವತೆಗೆ ಇಷ್ಟವಾಗದಿದ್ದಲ್ಲಿ ರೋಗರುಜಿನಗಳು, ಕಷ್ಟಗಳು ಬರುತ್ತವೆ ಎಂಬುದು ಅವರ ದೃಢವಾದ

ನಂಬಿಕೆ. ಅಂತಹ ಸಂದರ್ಭದಲ್ಲಿ ದೇವರನ್ನು ಕರೆದು ಪ್ರಶ್ನೆ ಕೇಳಿ ದೇವತೆಯು ಸೂಚಿಸಿದಂತೆ ನಾಮಕರಣ ಮಾಡಲಾಗುತ್ತದೆ.

**ಪ್ರೌಢಾವಸ್ಥೆ**

ಹೆಣ್ಣು ಮಕ್ಕಳು ಋತುಮತಿಯಾದಾಗ ತಂದೆ ಅಥವಾ ತಾಯಿ ಹಾಡಿಯ ಯಜಮಾನನಿಗೆ ಹೇಳುತ್ತಾರೆ. ಅಂದು ಯಜಮಾನನು ಹಾಡಿಯ ಇತರರೊಂದಿಗೆ ಸೇರಿ ಹೆಣ್ಣುಮಗಳಿಗೆ ಮನೆಯ ಪಕ್ಕದಲ್ಲಿ ಪ್ರತ್ಯೇಕ ಗುಡಿಸಲು ನಿರ್ಮಿಸುತ್ತಾನೆ. ಈ ಗುಡಿಸಿಲಿನಲ್ಲಿ ಮೈನೆರದ ಯುವತಿ ಮತ್ತು ಅವಳ ಸಹಾಯಕ್ಕೆ ಬಾಲಕಿ ಅಥವಾ ವೃದ್ಧೆ ಇರುತ್ತಾರೆ. ಹಾಡಿಯ ಸ್ತ್ರೀಯರು ಪ್ರತಿದಿನ ರಾತ್ರಿ ಬಿಸಿ ನೀರಿನ ಸ್ನಾನ ಮಾಡಿಸುತ್ತಾರೆ. ಋತುಮತಿಯಾದ ಯುವತಿಯ ಮುಖವನ್ನು ಪುರುಷರು ನೋಡಬಾರದೆಂದು, ನೋಡಿದರೆ ತಮ್ಮ ದೇವತೆಗಳಿಗೆ ಕೋಪ ಬಂದು ವಂಶಕ್ಕೆ ಹಾನಿಯಾಗುತ್ತದೆ ಎಂಬ ನಂಬಿಕೆಯಿದೆ.

ಋತುಮತಿಯಾದ ಹುಡುಗಿ ಹೊರಗಡೆ ಓಡಾಡಬಾರದು, ಆಹಾರವನ್ನು ಅವಳಿರುವ ಸ್ಥಳಕ್ಕೆ ಒದಗಿಸಲಾಗುತ್ತದೆ. ಋತುಮತಿಯಾದ 3 ತಿಂಗಳು ಕಳೆದ ತರುವಾಯು ಪ್ರೌಢಾವಸ್ಥೆಯ ಸಂಸ್ಕಾರವನ್ನು ಆಚರಿಸುತ್ತಾರೆ. (ಬಸವರಾಜು–1975). ಅಂದು ಹಾಡಿಯವರಿಗೆ ಮತ್ತು ರಕ್ತ ಸಂಬಂಧಿಗಳಿಗೆಲ್ಲ ಅಡುಗೆಯನ್ನು ಅವಿವಾಹಿತ ಯುವತಿಯರೇ ತಯಾರಿಸಬೇಕು. ಬಂಧುಗಳು ಮತ್ತು ಹಾಡಿಯ ಜನರು ಆಹಾರ ಸೇವಿಸಿದ ನಂತರ ಹಾಡಿಯ ಚಾವಡಿಗೆ ಬಂದು ಸೇರುತ್ತಾರೆ. ಸ್ತ್ರಿಯರು ಋತುಮತಿಯಾದ ಯುವತಿಗೆ ಸ್ನಾನಮಾಡಿಸಿ ಹೊಸ ಸೀರೆಯನ್ನು ಧರಿಸಲು ಕೊಡುತ್ತಾರೆ. ಈ ಸಮಯದಲ್ಲಿ ಆಪ್ತಸಹಾಯಕಳಾಗಿ ಸೇವೆ ಸಲ್ಲಿಸದವರಿಗೂ ವಸ್ತ್ರವನ್ನು ಉಡುಗೊರೆಯಾಗಿ ಕೊಡುತ್ತಾರೆ. ತನ್ನ ಆಪ್ತಸಹಾಯಕಿಯೊಂದಿಗೆ ಋತುಮತಿಯಾದ ಯುವತಿಯು ಚಾವಡಿಗೆ ಬಂದು ಅಲ್ಲಿ ನೆರೆದಿರುವ ಹಿರಿಯರಿಗೆಲ್ಲ ಕಾಲು ಹಿಡಿದು ನಮಸ್ಕರಿಸುತ್ತಾಳೆ. ಈ ಸಂಸ್ಕಾರಕ್ಕೆ ಬಂದವರಿಗೆಲ್ಲ ಎಲೆ ಅಡಿಕೆ ನೀಡುತ್ತಾರೆ ಅಲ್ಲಿಗೆ ಋತುಮತಿ ಸಂಸ್ಕಾರದ ವಿಧಿ ಮುಗಿದಂತೆ. ಇಂದಿಗೂ ಸಹಾ ಈ ಪದ್ಧತಿಯನ್ನು ಜೇನುಕುರುಬರಲ್ಲಿ ನಾವು ಕಾಣಬಹುದಾಗಿದೆ.

**ವಿವಾಹ ಪದ್ಧತಿ**

ಜೇನುಕುರುಬ ಜನಾಂಗದಲ್ಲಿ ಹದಿನೈದು ವಯಸ್ಸು ತುಂಬಿದ ಮಕ್ಕಳಿಗೆ ಮದುವೆ ಮಾಡುವ ಪದ್ಧತಿ ರೂಢಿಯಲ್ಲಿದೆ. ಏಕಪತ್ನಿತ್ವ ವ್ಯವಸ್ಥೆ ಅಸ್ಥಿತ್ವದಲ್ಲಿರುವಂತೆ ವಿಧವಾ ವಿವಾಹ, ಮರುವಿವಾಹಕ್ಕೆ ಅವಕಾಶವಿದೆ. ಕೂಡಿಕೊಳ್ಳುವುದು, ಮದುವೆಯಾಗುವುದು ವಿವಾಹದ ಮುಖ್ಯ ವಿಧಾನಗಳು. ವಧುದಕ್ಷಿಣೆ ಅಥವಾ ವರದಕ್ಷಿಣೆ ಪದ್ಧತಿ ಇಲ್ಲ. ಮದುವೆ ವಿಷಯದಲ್ಲಿ ಗಂಡಿನಷ್ಟೆ ಹೆಣ್ಣಿಗೆ ಸಮಾನ ಸ್ವಾತಂತ್ರ್ಯವಿದೆ. ಇವರ ವೈವಾಹಿಕ ಜೀವನವು ಸರಳತೆಯಿಂದ ಹಾಗೂ ವೈವಿಧ್ಯತೆಯಿಂದ ಕೂಡಿರುತ್ತದೆ. ಈ ಸಮುದಾಯದಲ್ಲಿ ಪ್ರೀತಿಸಿ ಮದುವೆಯಾಗುವುದು ಕಂಡುಬರುತ್ತದೆ. ಸ್ವಜಾತಿಯಲ್ಲಿ ಗಂಡು ಹೆಣ್ಣು ಪ್ರೀತಿಸಿದರೆ, ಪ್ರೀತಿಯ ಸಂಬಂಧಗಳನ್ನು ಯಾರೂ ಧಿಕ್ಕರಿಸುವುದಿಲ್ಲ. ಇವರಲ್ಲಿ ಹೆಣ್ಣಿಗೆ ತಾಳಿ ಕಟ್ಟುವ ಸಂಪ್ರದಾಯವಿದೆ. ಆದರೆ ತಾಳಿ ಅನಿವಾರ್ಯವಲ್ಲ. ಪರಸ್ಪರ ಒಪ್ಪಿಗೆ ಮುಖ್ಯ. ಗಂಡ ಹೆಂಡತಿ ಏಕವಚನದಲ್ಲಿ ಮಾತನಾಡಿದರೂ ಪ್ರೀತಿ ಗೌರವದಿಂದ ಇರುತ್ತಾರೆ ಮತ್ತು ವಧುವನ್ನು ಆರಿಸುವಾಗ ಸಾಮಾನ್ಯವಾಗಿ ತಂದೆಯ ಸಹೋದರಿಯ ಮಗಳ

ಜೊತೆ ಇಲ್ಲವೆ ತಾಯಿಯ ಸಹೋದರನ ಮಗಳ ಜೊತೆ ಮತ್ತು ಹಿರಿಯಕ್ಕನ ಮಗಳ ಜೊತೆ ವಿವಾಹ ಮಾಡುವ ವಾಡಿಕೆಯಿದೆ.

**ಶವ ಸಂಸ್ಕಾರ**

ಜೇನುಕುರುಬರಲ್ಲಿ ಸತ್ತವರನ್ನು ಹೂಳುವ ಪದ್ಧತಿಯಿದೆ ಇವರಲ್ಲಿ 3ನೇ ದಿನಕ್ಕೆ ಹಾಲು ತುಪ್ಪ ಮತ್ತು 12ನೇ ದಿನಕ್ಕೆ ತಿಥಿಯನ್ನು ಆಚರಿಸುತ್ತಾರೆ. ಜೇನುಕುರುಬರ ಮನೆಯಲ್ಲಿ ಯಾರಾದರೂ ಸತ್ತರೆ, ಸತ್ತವರ ಪ್ರೇತವು ಕುಲಸ್ಥರ ಕನಸಿನಲ್ಲಿ ಕಾಣಿಸಿಕೊಳ್ಳುವುದೆಂಬ ನಂಬಿಕೆ ಇದೆ. ಆತ್ಮಹತ್ಯೆ ಮಾಡಿಕೊಂಡರೆ, ಕ್ರೂರ ಮೃಗಗಳಿಗೆ ಬಲಿಯಾದರೆ ಅಥವಾ ಅನಾರೋಗ್ಯದ ನಿಮಿತ್ತ ಹಾಡಿಯಿಂದ ಹೊರಗೆ ಸತ್ತರೆ ಹಾಡಿಗೆ ತಂದು ಸ್ನಾನ ಮಾಡಿಸಿ ನಂತರ ಸ್ಮಶಾನಕ್ಕೆ ತೆಗೆದುಕೊಂಡು ಹೋಗಿ ಶವ ಸಂಸ್ಕಾರ ಮಾಡಲಾಗುತ್ತದೆ. ಹಬ್ಬ ಹರಿದಿನಗಳಲ್ಲಿ ಕಷ್ಟ ಸುಖಗಳಲ್ಲಿ, ವಿವಾಹ, ಋತುಮತಿ ಇನ್ನೂ ಮುಂತಾದ ಧಾರ್ಮಿಕ ಸಂಸ್ಕಾರಗಳಲ್ಲಿ ಸತ್ತವರನ್ನು ನೆನೆದು ಅನ್ನ ಹಾಕುತ್ತಾರೆ. (ಬಸವರಾಜು–1975) ಇತ್ತೀಚಿನ ದಿನಗಳಲ್ಲಿಯೂ ಸಹಾ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿದ್ದಾರೆ.

**ಧಾರ್ಮಿಕ ಜೀವನ**

ಜೇನುಕುರುಬ ಸಮುದಾಯದಲ್ಲಿ ಹೆತ್ತಜ್ಜ, ಅಜ್ಜಮ್ಮ ಇವರ ನಂಬಿಕೆಯ ದೇವರುಗಳು. ದೇವರನ್ನು ಏಕವಚನದಲ್ಲೆ ಮಾತನಾಡಿಸುತ್ತಾರೆ. ದೇವರನ್ನು ಮೈಮೇಲೆ ಬರಿಸಿ ಕೊಂಡು ತಮ್ಮ ಆತಂಕಗಳನ್ನು ಪರಿಹರಿಸಿಕೊಳ್ಳುತ್ತಾರೆ. ದೇವರು ಮೈಮೇಲೆ ಬರಿಸಿಕೊಳ್ಳಲು ಬುರುಡೆ ಕರೆಯುತ್ತಾರೆ. ಬುರುಡೆ ಕರೆಯಲು ಕಹಿ ಸೋರೆಕಾಯಿಯನ್ನು ಬಳಸುತ್ತಾರೆ. (ಶ್ರೀಕಾಂತ್.ಎಸ್–2005) ಹಾಡಿಯಲ್ಲಿ ದೇವರ ಗುಡ್ಡನಿರುತ್ತಾನೆ. ಸಾಮಾನ್ಯವಾಗಿ ದೇವರ ಗುಡ್ಡರಿಗೆ ಗಿಡಮೂಲಿಕೆ ಔಷದಗಳ ಜ್ಞಾನವಿರುತ್ತದೆ ಹಾಗೂ ಹಾಡಿಯಲ್ಲಿರುವ ಕುಟುಂಬಗಳ ಸಂಪೂರ್ಣ ಪರಿಚಯವಿರುತ್ತದೆ.

ಇವರು ದೇವತೆಗಳನ್ನು ಮರದ ಕೆಳಗೆ ಅಥವಾ ದೇವಸ್ಥಾನಗಳನ್ನು ನಿರ್ಮಿಸಿ ಪೂಜಿಸುತ್ತಾರೆ. ಇವರ ದೇವಸ್ಥಾನಗಳು ಅತ್ಯಂತ ಚಿಕ್ಕದಾಗಿದ್ದು ಚೊಕ್ಕವಾಗಿರುತ್ತದೆ. ಇಲ್ಲಿಗೆ ಬೇರೆ ಸಮುದಾಯದವರ ಪ್ರವೇಶವಿರುವುದಿಲ್ಲ. ಒಂದು ವೇಳೆ ಪ್ರವೇಶಿಸಿದರೆ ದೇವರು ಮುನಿಸಿಕೊಳ್ಳುತ್ತಾನೆ ಎಂಬ ನಂಬಿಕೆ ಅವರಲ್ಲಿದೆ. ಇವರು ಬೈರಮ್ಮ, ಬೊಮ್ಮ ದೇವರು, ಬೆಟ್ಟದ ಚಿಕ್ಕಮ್ಮ, ಬೆಟ್ಟದ ದೊಡ್ಡಮ್ಮ, ಗೋಪಾಲಸ್ವಾಮಿ, ಆಂಜನೇಯ, ಮಾದೇಶ್ವರ ಮುಂತಾದ ದೇವರುಗಳನ್ನು ಪೂಜಿಸುತ್ತಾರೆ. ಇವರು ತಮ್ಮ ಸಾಂಪ್ರದಾಯಿಕ ಹಬ್ಬಗಳ ಜೊತೆಗೆ ಗೌರಿ, ಸಂಕ್ರಾಂತಿ, ಶಿವರಾತ್ರಿ ಮತ್ತು ಯುಗಾದಿ ಹಬ್ಬಗಳನ್ನು ಸಹಾ ಆಚರಿಸುತ್ತಾರೆ. (ಬಸವರಾಜು 1975)

**ನ್ಯಾಯ ಪದ್ಧತಿ**

ಜೇನು ಕುರುಬರ ನ್ಯಾಯ ಪದ್ಧತಿ ಅತ್ಯಂತ ವಿಶೇಷವಾಗಿದ್ದು ಇದನ್ನು ಹಾಡಿಯ ನ್ಯಾಯ ಎಂದು ಕರೆಯುತ್ತಾರೆ. ಹಾಡಿಯ ಸಮಸ್ಯೆಗಳನ್ನು ಇಲ್ಲಿ ಬಗೆಹರಿಸಿಕೊಳ್ಳಲಾಗುತ್ತದೆ. ಯಜಮಾನನೆ ಮುಖ್ಯ ನ್ಯಾಯಾಧೀಶ. ಸತ್ಯಾ–ಸತ್ಯತೆಗಳನ್ನು ಸಾರ್ವಜನಿಕವಾಗಿ ಪರಿಶೀಲಿಸಿ ಯಾವ ದ್ವೇಷಕ್ಕೂ ಎಡೆಮಾಡಿಕೊಡದೆ ತಪ್ಪಿತಸ್ಥರು ತಪ್ಪನ್ನು ಒಪ್ಪಿಕೊಳ್ಳುವಂತಹ, ಕ್ಷಮಿಸುವಂತಹ ವಾತಾವರಣವನ್ನು ಸೃಷ್ಟಿಮಾಡಿ ಅತ್ಯಲ್ಪ

ದಂಡವನ್ನು ಹಾಕಿ ಎಲೆ–ಅಡಿಕೆಯನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವ ಮೂಲಕ ಸಮಸ್ಯೆ ಬಗೆಹರಿಸಿ ದ್ವೇಷ ಮರೆಸಿ ಸೌಹಾರ್ದದಿಂದ ಬಾಳುವಂತೆ ಮಾಡುತ್ತಾರೆ. ಹಾಡಿ–ಹಾಡಿಗಳ ನಡುವಿನ ಸಮಸ್ಯೆಗಳಾದಲ್ಲಿ ಹಾಡಿಗಳ ಯಜಮಾನರುಗಳ ಸಮ್ಮುಖದಲ್ಲಿ ನ್ಯಾಯ ತೀರ್ಮಾನಗಳನ್ನು ಮಾಡುತ್ತಾರೆ. ಇಲ್ಲಿ ನ್ಯಾಯ ಬಗೆಹರಿಯದಿದ್ದಲ್ಲಿ ಹತ್ತಾರು ಹಾಡಿಗಳನ್ನು ಒಳಗೊಂಡಿರುವ ಗಡಿ ನ್ಯಾಯಕ್ಕೆ ಹಾಕುತ್ತಾರೆ. ಯಜಮಾನನ ತೀರ್ಮಾನವೇ ಅಂತಿಮ. ಹಾಡಿಯ ಯಜಮಾನನ ಮೇಲೆ ದೇವತೆಗಳು ಮೈಮೇಲೆ ಬರುತ್ತವೆ. ಬುರುಡೆ ಕರೆಯುವ ವ್ಯಕ್ತಿಯೂ ಸಹಾ ಇವನೇ ಆಗಿರುತ್ತಾನೆ. ಯಜಮಾನಿಕೆ ಅತ್ಯಂತ ಸರಳ ಪದ್ಧತಿಯಾಗಿದ್ದರೂ ಹೆಚ್ಚು–ಕಡಿಮೆ ಸಮಗ್ರವಾಗಿ ಹಾಡಿಯನ್ನು ನಡೆಸಿಕೊಂಡು ಹೋಗುವಂತಹ ವ್ಯವಸ್ಥೆಯಾಗಿದೆ. ಇಲ್ಲಿ ಸಹಮತ, ಒಮ್ಮತ ಇವರ ನ್ಯಾಯದ ಜೀವಾಳವಾಗಿರುತ್ತದೆ.

**ಜೇನುಕುರುಬರ ಭಾಷೆ**

ಜೇನು ಕುರುಬರು ತಮ್ಮದೇ ಆದ ಭಾಷೆಯನ್ನು ಮಾತಾನಾಡುತ್ತಾರೆ. ಕನ್ನಡಕ್ಕೆ ಹತ್ತಿರವಾದರೂ ತೀರ ವಿಭಿನ್ನತೆಯಿಂದ ಕೂಡಿದ ಭಾಷೆಯಾಗಿದ್ದು, ಹೊರಗಿನ ಸಮುದಾಯದವರು ಸುಲಭವಾಗಿ ಅರ್ಥೈಸಿಕೊಳ್ಳಲು ಸಾಧ್ಯವಿಲ್ಲ. ಈ ಭಾಷೆಯನ್ನು 'ಜೇನುನುಡಿ' ಎಂದು ಕರೆಯಲಾಗುತ್ತದೆ. ಈ ಭಾಷೆಗೆ ಲಿಪಿ ಇಲ್ಲ. ಇವರ ಭಾಷೆಯಲ್ಲಿ ತಮಿಳು, ಕನ್ನಡ, ಮಲೆಯಾಳಂ ಮುಂತಾದ ಭಾಷೆಗಳ ಮಿಶ್ರಣವನ್ನು ಕಾಣಬಹುದು. ಇವರು ತಮ್ಮ ಭಾಷೆಯನ್ನು ತಮ್ಮ ಜನಾಂಗದವರೊಡನೆ ಮಾತ್ರ ಮಾತನಾಡುತ್ತಾರೆ. ದೇವರು ಕರೆಯುವಾಗ ಮತ್ತು ಇತರೆ ಸಾಂಪ್ರದಾಯಿಕ ಆಚರಣೆಗಳಲ್ಲಿ ಅವರದೇ ಆದ ಭಾಷೆಯನ್ನು ಬಳಸುತ್ತಾರೆ. ಆದರೆ ಇತರರೊಡನೆ ಮಾತನಾಡುವಾಗ ಕನ್ನಡ ಭಾಷೆ ಬಳಸುತ್ತಾರೆ.

**ಉಪಸಂಹಾರ**

ಒಟ್ಟಾರೆ ಹೇಳುವುದಾದರೆ ಜೇನುಕುರುಬರ ಸಾಮಾಜಿಕ ಜೀವನವು ಅತ್ಯಂತ ವಿಶಿಷ್ಟವಾದುದ್ದು. ಅವರಿಗೆ ಅವರದೇ ಆದ ಸಾಮಾಜಿಕ ವ್ಯವಸ್ಥೆ, ಆಹಾರ ಪದ್ಧತಿ, ಆರ್ಥಿಕ ವ್ಯವಸ್ಥೆಯಿದ್ದು ಒಂದಕ್ಕೊಂದು ಅವರ ಸಂಸ್ಕೃತಿಯೊಂದಿಗೆ ಬೆಸೆದುಕೊಂಡಿವೆ. ಸಾಮಾನ್ಯವಾಗಿ ಜೇನುಕುರುಬರು ಮನೆಯೊಳಗಡೆ ಮಲಗುವುದಿಲ್ಲ. ಬದಲಿಗೆ ಬೆಂಕಿ ಹಾಕಿಕೊಂಡು ಹೊರಗಡೆ ಮಲಗುತ್ತಾರೆ. ಇವರು ಇತರೆ ಬುಡಕಟ್ಟುಗಳಾದ ಸೋಲಿಗ, ಬೆಟ್ಟಕುರುಬ, ಮುಂತಾದ ಸಮುದಾಯದವರಿಗಿಂತ ಶ್ರೇಷ್ಠರು ಎಂಬ ಭಾವನೆಯಿದೆ. ಯಾರಾದರೂ ಪಾದರಕ್ಷೆಯಿಂದ ಹೊಡೆದರೆ ಅಂತಹ ವ್ಯಕ್ತಿಯನ್ನು ಜೀವನ ಪರ್ಯಂತ ಕುಲದಿಂದ ಹೊರಗಿಡಲಾಗುತ್ತಿತ್ತು. ಆದರೆ ಕುಲಸ್ಥರು ಇತ್ತೀಚೆಗೆ ಅಂತಹವನಿಗೆ ದಂಡ ವಿಧಿಸಿ ಕುಲಕ್ಕೆ ಸೇರಿಸಿಕೊಳ್ಳುವ ಪದ್ಧತಿ ಬೆಳೆದು ಬಂದಿದೆ (ಮಧು–2002) ಇವರು ಧಾರ್ಮಿಕ ನಿಯಮಗಳಿಗೆ ಬದ್ಧರಾಗಿದ್ದಾರೆ. ಇಲ್ಲಿಯ ಯುವಕ ಯುವತಿಯರು, ಸ್ತ್ರೀ ಪುರುಷರು ಅವರ ಹಬ್ಬಗಳಲ್ಲಿ ಗುಡಿಸಲಿನ ಮುಂಭಾಗದಲ್ಲಿ ಸೇರಿ ಹಾಡನ್ನು ಹಾಡುತ್ತಾ ಕುಣಿಯುತ್ತಾರೆ. ಮೊದಲು ಇವರು ಒಂದೆಡೆ ಸ್ಥಿರವಾಗಿ ನೆಲೆಸುತ್ತಿರಲಿಲ್ಲ. ಒಂದೆಡೆ ನೆಲೆಸಿ ಬೇಡವೆನಿಸಿದರೆ ಮತ್ತೊಂದೆಡೆಗೆ ಹೋಗಿ ನೆಲೆಸುತ್ತಿದ್ದರು. ಆದರೆ ಸರ್ಕಾರದ ಯೋಜನೆಗಳಿಂದಾಗಿ ಸರ್ಕಾರವು ಅವರನ್ನು ಕಾಡಿನಿಂದ ಹೊರಗೆ ತಂದು ಮನೆಗಳನ್ನು ನಿರ್ಮಿಸಿ ಒಂದೆಡೆ ನೆಲೆನಿಲ್ಲುವಂತೆ ಮಾಡಿದೆ.

**ಪರಾಮರ್ಶನ ಗ್ರಂಥಗಳು:**


- ಕೃಷ್ಣ ಅಯ್ಯಂಗಾರ್. ಡಿ. (1956). *ಕನ್ನಡ ನಾಡಿನ ಆದಿವಾಸಿಗಳು. (ಮೈಸೂರು ರಾಜ್ಯ).* ವಾರ್ತೆ ಇಲಾಖೆ, ಮೈಸೂರು ಸರ್ಕಾರ ಬೆಂಗಳೂರು, 1956. ಪು.ಸಂ. 497
- ಪಳನಿಸ್ವಾಮಿ. (2011). *ಗುಂಡ್ಲುಪೇಟೆ ತಾಲ್ಲೂಕು ಒಂದು ಸಾಂಸ್ಕೃತಿಕ ಅಧ್ಯಯನ.* ಸ್ಕಂದಶ್ರೀ ಪ್ರಕಾಶನ. ಗುಂಡ್ಲುಪೇಟೆ.
- ಪಾರ್ವತಮ್ಮ. ಸಿ (ಸಂ). (2007). ಆದಿವಾಸಿಗಳ ಸಮುದಾಯಗಳ ಅಭಿವೃದ್ಧಿ. ಪ್ರಸಾರಂಗ. ಕನ್ನಡ.ವಿ.ವಿ. ಹಂಪಿ


- ಪಳನಿಸ್ವಾಮಿ. (2011). *ಗುಂಡ್ಲುಪೇಟೆ ತಾಲ್ಲೂಕು ಒಂದು ಸಾಂಸ್ಕೃತಿಕ ಅಧ್ಯಯನ.* ಸ್ಕಂದಶ್ರೀ ಪ್ರಕಾಶನ. ಗುಂಡ್ಲುಪೇಟೆ.
- ಪಾರ್ವತಮ್ಮ. ಸಿ (ಸಂ). (2007). ಆದಿವಾಸಿಗಳ ಸಮುದಾಯಗಳ ಅಭಿವೃದ್ಧಿ. ಪ್ರಸಾರಂಗ. ಕನ್ನಡ.ವಿ.ವಿ. ಹಂಪಿ


- ಶ್ರೀಕಾಂತ್. ಎಸ್ (2002). *ಕರ್ನಾಟಕ ಮೂಲನಿವಾಸಿ ಬುಡಕಟ್ಟುಗಳು: ಅವರ ಬದುಕು ಮತ್ತು ಸಂಕಷ್ಟಗಳು.* ಇಲ್ಲಿ ಸ್ವಾವಲಂಬನೆಯತ್ತ ಗ್ರಾಮೀಣ ಜನ ಸಮುದಾಯಗಳು, ಸ್ಮರಣ ಸಂಚಿಕೆ, ಫೆವಾರ್ಡ್–ಕರ್ನಾಟಕ. ಬೆಂಗಳೂರು.
- ಶ್ರೀಕಾಂತ್.ಎಸ್ (2005*). ಜೇನು ಕುರುಬರು.* ಇಲ್ಲಿ ಪಾರ್ವತಮ್ಮ, ಸಿ. ಮತ್ತು ರಾಜೇಗೌಡ (ಸಂ). ಆದಿವಾಸಿ ಸಮುದಾಯಗಳ ಬದುಕು ಬವಣೆ, ಗ್ರಾಮೀಣ ಮತ್ತು ಆದಿವಾಸಿ ಅಭಿವೃದ್ಧಿ ಸಂಶೋಧನಾ ಕೇಂದ್ರ. ಮೈಸೂರು–02. ಪು.ಸಂ.1–23